KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ನವೆಂಬರ್ ೨೨, ೨೦೦೭ (ಮಾರ್ಗಶಿರ ೧, ಶಕ ವರ್ಷ ೧೯೨೯) | ಸಂಚಿಕೆ ೪೬ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಕರ್ನಾಟಕ ಲೋಕ ಸೇವಾ ಆಯೋಗ**

**ಉದ್ಯೋಗ ಸೌಧ, ಬೆಂಗಳೂರು–560 001.**

**ಅಧಿಸೂಚನೆ ಸಂಖ್ಯೆ: ಇ(1) 678/2007–08/ಪಿಎಸ್‌ಸಿ ದಿನಾಂಕ: 05ನೇ ನವೆಂಬರ್ 2007**

1. ಕರ್ನಾಟಕ ಶಿಕ್ಷಣ ಇಲಾಖೆ ಸೇವೆಗಳು (ಸಾರ್ವಜನಿಕ ಶಿಕ್ಷಣ ಇಲಾಖೆ) (ನೇಮಕಾತಿ) (ತಿದ್ದುಪಡಿ) ನಿಯಮಗಳು 2006 ಹಾಗೂ ಗೆಜೆಟೆಡ್ ಪ್ರೊಬೇಷನರ್ಸ್‌ಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇಮಕಾತಿ) ನಿಯಮಗಳು 1997ರಡಿಯಲ್ಲಿ **ಸಮೂಹ ' ಬಿ ' ಗುಂಪಿನ ಮುಖ್ಯ ಶಿಕ್ಷಕರು / ಮುಖ್ಯ ಶಿಕ್ಷಕಿಯರ 629 ಹುದ್ದೆಗಳನ್ನು** ಭರ್ತಿ ಮಾಡಲು ಆಯೋಗವು ನಡೆಸುವ ಪೂರ್ವಭಾವಿ ಪರೀಕ್ಷೆಗೆ ಅರ್ಹ ಅಭ್ಯರ್ಥಿಗಳಿಂದ **ಆಯೋಗವು ನಿಗದಿಪಡಿಸಿರುವ ಅರ್ಜಿ ನಮೂನೆಯಲ್ಲಿ** ಅರ್ಜಿಗಳನ್ನು ಆಹ್ವಾನಿಸಿದೆ.

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ 24–12–2007 ಆಗಿರುತ್ತದೆ.**

2. ಸದರಿ ಹುದ್ದೆಗಳಿಗೆ ಅರ್ಜಿಗಳನ್ನು ಆಯೋಗವು ನಿಗದಿಪಡಿಸಿರುವ ನಮೂನೆಯಲ್ಲಿಯೇ ಸಲ್ಲಿಸಬೇಕು. ಇತರೆ ಯಾವುದೇ ನಮೂನೆಗಳ ಅಥವಾ ಬೆರಳಚ್ಚು / ಫೋಟೋ ಪ್ರತಿ ಮಾಡಿರುವ, ಕೈಬರಹದಿಂದ ಸಲ್ಲಿಸಲ್ಪಡುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
3. ಅರ್ಜಿಗಳನ್ನು ರೂ.50/– ನಗದಾಗಿ ಪಾವತಿಸಿ ಆಯೋಗದ ಕೇಂದ್ರ ಕಛೇರಿ ಮತ್ತು ಪ್ರಾಂತೀಯ ಕಛೇರಿ ಹಾಗೂ ಕೆಳಗೆ ನಮೂದಿಸಿರುವ ಯಾವುದೇ ಅಂಚೆ ಕಛೇರಿಗಳಲ್ಲಿ ಪಡೆಯಬಹುದು.
   1. ಬೆಂಗಳೂರು ಪ್ರಧಾನ ಅಂಚೆ ಕಛೇರಿ
   2. ಬೆಂಗಳೂರಿನ ಮುಖ್ಯ ಅಂಚೆ ಕಛೇರಿಗಳು :– ಎ) ಹೆಚ್.ಎ.ಎಲ್ 2ನೇ ಹಂತ ಬಿ) ರಾಜಾಜಿನಗರ ಸಿ) ಬಸವನಗುಡಿ ಡಿ) ಆರ್.ಟಿ.ನಗರ ಇ) ಜಾಲಹಳ್ಳಿ ಎಫ್) ಜಯನಗರ ಜಿ) ಬೆಂಗಳೂರು ನಗರ (ಸಿಟಿ ಮಾರುಕಟ್ಟೆ)

      ಈ ಕೆಳಕಂಡ ಮುಖ್ಯ ಅಂಚೆ ಕಛೇರಿಗಳು

| | | |
|---|---|---|
| 1. ಬಾಗಲಕೋಟೆ | 13. ಮಂಗಳೂರು | 25. ಸರಸ್ವತಿಪುರಂ (ಮೈಸೂರು) |
| 2. ಬೆಳಗಾವಿ | 14. ಗದಗ | 26. ರಾಯಚೂರು |
| 3. ಚಿಕ್ಕೋಡಿ | 15. ಗುಲ್ಬರ್ಗ | 27. ಶಿವಮೊಗ್ಗ |
| 4. ಬಳ್ಳಾರಿ | 16. ಯಾದಗಿರಿ | 28. ಸಾಗರ |
| 5. ಹೊಸಪೇಟೆ | 17. ಹಾಸನ | 29. ತುಮಕೂರು |
| 6. ಬಿಜಾಪುರ | 18. ಹಾವೇರಿ | 30. ತಿಪಟೂರು |
| 7. ಚಾಮರಾಜನಗರ | 19. ಮಡಿಕೇರಿ | 31. ಉಡುಪಿ |

| | | |
|---|---|---|
| 8. ಚಿಕ್ಕಮಗಳೂರು | 20. ಕೋಲಾರ | 32. ಕಾರವಾರ |
| 9. ಚಿತ್ರದುರ್ಗ | 21. ಚಿಕ್ಕಬಳ್ಳಾಪುರ | 33. ಶಿರಸಿ |
| 10. ದಾವಣಗೆರೆ | 22. ಕೊಪ್ಪಳ | 34. ಬೀದರ್ |
| 11. ಧಾರವಾಡ | 23. ಮಂಡ್ಯ | 35. ರಾಮನಗರ |
| 12. ಹುಬ್ಬಳ್ಳಿ | 24. ಮೈಸೂರು | 36. ಚನ್ನಪಟ್ಟಣ |

**ಪ್ರಾಂತೀಯ ಕಛೇರಿಗಳ ವಿಳಾಸ:**

1. **ಸಹಾಯಕ ಕಾರ್ಯದರ್ಶಿ**
ಕರ್ನಾಟಕ ಲೋಕಸೇವಾ ಆಯೋಗ
ಪ್ರಾಂತೀಯ ಕಛೇರಿ
ಸಂಖ್ಯೆ:899, 3ನೇ ಮೈನ್, 8ನೇ ಅಡ್ಡರಸ್ತೆ,
ಸರಸ್ವತಿಪುರಂ,
ಮೈಸೂರು–570 009

2. **ಸಹಾಯಕ ಕಾರ್ಯದರ್ಶಿ**
ಕರ್ನಾಟಕ ಲೋಕಸೇವಾ ಆಯೋಗ
ಪ್ರಾಂತೀಯ ಕಛೇರಿ
ಸಿಟಿಎಸ್ ನಂ.6543, ಸೆಕ್ಟರ್ 10
ಮಾಳ ಮಾರುತಿ ಬಡಾವಣೆ,
ಆಂಜನೇಯನಗರ, ಬೆಳಗಾವಿ–590 016

3. **ಸಹಾಯಕ ಕಾರ್ಯದರ್ಶಿ,**
ಕರ್ನಾಟಕ ಲೋಕಸೇವಾ ಆಯೋಗ
ಪ್ರಾಂತೀಯ ಕಛೇರಿ,
ಸಂಖ್ಯೆ: 28, 3ನೇ ಮಹಡಿ
ವಿಕಾಸ ಭವನ, ಮಿನಿ ವಿಧಾನಸೌಧ
ಗುಲ್ಬರ್ಗಾ–585 102

**ಸೂಚನೆ: ಭರ್ತಿ ಮಾಡಿದ ಅರ್ಜಿಗಳನ್ನು ಪರೀಕ್ಷಾ ಶುಲ್ಕದೊಂದಿಗೆ ಕರ್ನಾಟಕ ಲೋಕ ಸೇವಾ ಆಯೋಗದ ಕೇಂದ್ರ ಕಛೇರಿ, ಬೆಂಗಳೂರು ಅಥವಾ ಆಯೋಗದ ಪ್ರಾಂತೀಯ ಕಛೇರಿ, ಹಾಗೂ ಈ ಮೇಲೆ ತಿಳಿಸಲಾದ ಅಂಚೆ ಕಛೇರಿಗಳಲ್ಲಿ ಖುದ್ದಾಗಿ ಸಲ್ಲಿಸಬೇಕು. ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ನಿಗದಿತ ಕೊನೆಯ ದಿನಾಂಕದ ನಂತರ ಬರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

**4.** **ಪರೀಕ್ಷಾ ಕೇಂದ್ರಗಳು:**–ಸ್ಪರ್ಧಾತ್ಮಕ ಪರೀಕ್ಷೆಯನ್ನು ಈ ಕೆಳಕಂಡ ಕೇಂದ್ರಗಳಲ್ಲಿ ನಡೆಸಲಾಗುವುದು.

| ಪರೀಕ್ಷಾ ಕೇಂದ್ರ | ಕೋಡ್ ನಂಬರ್ |
|---|---|
| ಬೆಂಗಳೂರು | 01 |
| ಧಾರವಾಡ | 02 |
| ಗುಲ್ಬರ್ಗಾ | 03 |
| ಮೈಸೂರು | 04 |

**ಅಭ್ಯರ್ಥಿಗಳು ಅರ್ಜಿಯಲ್ಲಿ ನಮೂದಿಸಿರುವ ಪರೀಕ್ಷಾ ಕೇಂದ್ರವನ್ನು ಯಾವುದೇ ಕಾರಣಕ್ಕೂ ಬದಲಾಯಿಸಲಾಗುವುದಿಲ್ಲ.**

5. ಹುದ್ದೆಗಳ ವರ್ಗೀಕರಣವನ್ನು ಈ ಕೆಳಕಂಡಂತೆ ತೋರಿಸಲಾಗಿದೆ. ಇದರಲ್ಲಿ ತೋರಿಸಲಾಗಿರುವ ವರ್ಗೀಕರಣ ಮತ್ತು ರಿಕ್ತ ಸ್ಥಾನಗಳು ಬದಲಾವಣೆಗೆ ಒಳಪಟ್ಟಿರುತ್ತವೆ.

**ಹುದ್ದೆಗಳ ವರ್ಗೀಕರಣ**

| ಮೀಸಲಾತಿ ವರ್ಗ | ಇತರೆ | ಮ | ಗ್ರಾ,ಅ | ಮಾ.ಸೈ | ಕ.ಮಾ.ಅ | ಅಂ.ವಿ | ಒಟ್ಟು |
|---|---|---|---|---|---|---|---|
| ಸಾಮಾನ್ಯ | 84 | 94 | 79 | 32 | 16 | *10 | 315 |
| ಪ.ಜಾ | 25 | 28 | 24 | 09 | 05 | **03 | 94 |
| ಪ.ಪಂ | 05 | 05 | 05 | 02 | 01 | ***01 | 19 |
| ಪ್ರವರ್ಗ–1 | 08 | 08 | 06 | 02 | 01 | –– | 25 |
| ಪ್ರವರ್ಗ–2ಎ | 25 | 28 | 24 | 09 | 05 | **03 | 94 |
| ಪ್ರವರ್ಗ–2ಬಿ | 08 | 08 | 06 | 02 | 01 | –– | 25 |
| ಪ್ರವರ್ಗ–3ಎ | 08 | 08 | 06 | 02 | 01 | –– | 25 |
| ಪ್ರವರ್ಗ–3ಬಿ | 09 | 10 | 08 | 03 | 01 | ****01 | 32 |
| ಒಟ್ಟು | 172 | 189 | 158 | 61 | 31 | 18 | 629 |

*** ಒಟ್ಟು 10 ಹುದ್ದೆಗಳಲ್ಲಿ 03 ಹುದ್ದೆಗಳು ಅಂಧ ಮತ್ತು ದೃಷ್ಟಿಮಾಂದ್ಯ ಅಭ್ಯರ್ಥಿಗಳಿಗೆ, 04 ಹುದ್ದೆಗಳು ಶ್ರವಣದೋಷ ಅಭ್ಯರ್ಥಿಗಳಿಗೆ ಹಾಗೂ 03 ಹುದ್ದೆಗಳು ಚಲನವಲನ ವೈಕಲ್ಯ ಅಭ್ಯರ್ಥಿಗಳಿಗೆ ಮೀಸಲಿದೆ.**

**** ಒಟ್ಟು 03 ಹುದ್ದೆಗಳಲ್ಲಿ 01 ಹುದ್ದೆ ಅಂಧ ಮತ್ತು ದೃಷ್ಟಿಮಾಂದ್ಯ ಅಭ್ಯರ್ಥಿಗಳಿಗೆ, 01 ಹುದ್ದೆ ಶ್ರವಣದೋಷ ಅಭ್ಯರ್ಥಿಗೆ ಹಾಗೂ 01 ಹುದ್ದೆ ಚಲನವಲನ ವೈಕಲ್ಯ ಅಭ್ಯರ್ಥಿಗೆ ಮೀಸಲಿದೆ.**

***** 01 ಹುದ್ದೆ ಶ್ರವಣದೋಷ ಅಭ್ಯರ್ಥಿಗಳಿಗೆ ಮೀಸಲಿದೆ.**

****** 01 ಹುದ್ದೆ ಚಲನವಲನ ವೈಕಲ್ಯ ಅಭ್ಯರ್ಥಿಗೆ ಮೀಸಲಿದೆ.**

6. **ಅರ್ಹತಾ ಷರತ್ತುಗಳು.**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು. ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಇ) ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಆಸುಇ 104 ಸೇನೆನಿ 2005 ದಿನಾಂಕ: 13/09/2005ರ ಅನುಸಾರ ಅಂಗವಿಕಲ ಮೀಸಲಾತಿ ಕೋರುವ ಅಭ್ಯರ್ಥಿಗಳು. ( ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 115 ಸೇನೆನಿ 2005, ದಿನಾಂಕ: 19/11/2005ರಲ್ಲಿ ನಿಗದಿಪಡಿಸಿದ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು. ಮೀಸಲಾತಿ ಇಲ್ಲದಿದ್ದಲ್ಲಿ ಇದರ ಅಗತ್ಯವಿಲ್ಲ.)

ಈ) ಅಂಗವಿಕಲರಿಗಾಗಿ ಮೀಸಲಿರಿಸಿರುವ ಹುದ್ದೆಗಳಿಗೆ ಸಂಬಂಧಿಸಿದಂತೆ **Blindness or Low vision; Hearing Impairment** ಮತ್ತು **Locomotive disability** ಹೊಂದಿರುವವರು ಮಾತ್ರ ಈ ಹುದ್ದೆಯ ಮೀಸಲಾತಿ ಕೋರಲು ಅರ್ಹತೆ ಹೊಂದಿರುತ್ತಾರೆ.

**For explanation of P.H. please see Notification No. DPAR 50 SRR 2000, dated: 03/09/2005. ಇದನ್ನು ಮಾಹಿತಿ ಪುಸ್ತಕದಲ್ಲಿ ನೀಡಲಾಗಿದೆ.**

7. <u>ಪರೀಕ್ಷಾ ವಿಧಾನ:</u>

ಈ ಸ್ಪರ್ಧಾತ್ಮಕ ಪರೀಕ್ಷೆಯು ಗೆಜೆಟೆಡ್ ಪ್ರೊಬೇಷನರ್‌ಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇಮಕಾತಿ) ನಿಯಮ 1997ರ ಷೆಡ್ಯೂಲ್ 2 ರಲ್ಲಿ ತಿಳಿಸಿರುವಂತೆ ಎರಡು ಹಂತಗಳನ್ನು ಒಳಗೊಂಡಿರುತ್ತದೆ. **ನಿಯಮಾವಳಿಗಳನ್ನು ಪುಸ್ತಕದ ಅನುಬಂಧ–2ರಲ್ಲಿ ನೀಡಲಾಗಿದೆ.**

1. ಪೂರ್ವಭಾವಿ ಪರೀಕ್ಷೆ (ಪ್ರಿಲಿಮಿನರಿ ಎಕ್ಸಾಮಿನೇಷನ್)–ಮುಖ್ಯ ಪರೀಕ್ಷೆಗೆ (ಮೈನ್ ಎಕ್ಸಾಮಿನೇಷನ್) ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಸಲುವಾಗಿ.
2. ಮುಖ್ಯ ಪರೀಕ್ಷೆ (ಮೈನ್ ಎಕ್ಸಾಮಿನೇಷನ್) (ಲಿಖಿತ ಪರೀಕ್ಷೆ ಮತ್ತು ವ್ಯಕ್ತಿತ್ವ ಪರೀಕ್ಷೆ)–ಅಭ್ಯರ್ಥಿಗಳನ್ನು ಈ ಹುದ್ದೆಗಳಿಗೆ ಆಯ್ಕೆ ಮಾಡುವ ಸಲುವಾಗಿ.

**<u>ಪೂರ್ವ ಭಾವಿ ಪರೀಕ್ಷೆಯು ವಸ್ತುನಿಷ್ಠ ಬಹು ಆಯ್ಕೆ ಮಾದರಿಯ ಎರಡು ಪ್ರಶ್ನೆ ಪತ್ರಿಕೆಗಳನ್ನು ಹೊಂದಿರುತ್ತದೆ.</u>**

| | | | |
|---|---|---|---|
| ಪತ್ರಿಕೆ 1 | ಸಾಮಾನ್ಯ ಅಧ್ಯಯನ | 150 ಅಂಕಗಳು | 2 ಗಂಟೆಗಳ ಅವಧಿ |
| ಪತ್ರಿಕೆ 2 | ಎಜುಕೇಷನ್ | 300 ಅಂಕಗಳು | 2 ಗಂಟೆಗಳ ಅವಧಿ |

**<u>ಪೂರ್ವಭಾವಿ ಪರೀಕ್ಷೆಯ ಪಠ್ಯಕ್ರಮ:–</u>**

**Paper-I** **<u>General Studies</u>**

a) General Science b) Current Events of State, National & International Importance
c) History of India d) World Geography
e) Indian Polity & Economy f) Indian National Movement & General Mental Ability

**Paper-II** **<u>Education</u>**

Part-I : Educational Administration - 100 marks
Part-II: Psychological Foundations - 100 marks
Part-III: New Initiatives in Karnataka - 100 marks

ಮುಖ್ಯ ಪರೀಕ್ಷೆಯ ಪ್ರವೇಶಕ್ಕೆ ಅರ್ಹತೆ ಹೊಂದಿದ ಅಭ್ಯರ್ಥಿಗಳು ಆಯೋಗದ ಸೂಚನೆ ಮೇರೆಗೆ ಮತ್ತೆ ಮುಖ್ಯ ಪರೀಕ್ಷೆಗೆ ಅರ್ಜಿಯನ್ನು ಹಾಕಿಕೊಳ್ಳಬೇಕು. ಅರ್ಜಿಗಳನ್ನು ಆಯೋಗವೇ ಒದಗಿಸುವುದು.

ಆಯೋಗವು ನಿಯಮಾನುಸಾರ ನಡೆಸುವ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಜೇಷ್ಠತೆ ಮತ್ತು ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಗಳನುಸಾರ ಇರುವ ಮೀಸಲಾತಿಯನ್ವಯ ಪ್ರಕಟಿಸಲಾದ ಖಾಲಿ ಹುದ್ದೆಗಳ ಸಂಖ್ಯೆಗೆ ಅನುಗುಣವಾಗಿ 1:20ರ ಪ್ರಮಾಣದಲ್ಲಿ ಅಭ್ಯರ್ಥಿಗಳನ್ನು ಮುಖ್ಯ ಪರೀಕ್ಷೆಗೆ ಆಯ್ಕೆ ಮಾಡಲಾಗುತ್ತದೆ.

**<u>ಮುಖ್ಯ ಪರೀಕ್ಷೆ:–</u>**

<u>ಮುಖ್ಯ ಪರೀಕ್ಷೆಯು ಆರು ಪತ್ರಿಕೆಗಳನ್ನೊಳಗೊಂಡಿರುತ್ತದೆ:–</u>

| | | |
|---|---|---|
| ಪತ್ರಿಕೆ 1 | ಕನ್ನಡ | 150 ಅಂಕಗಳು |
| ಪತ್ರಿಕೆ 2 | ಅಂಗ್ಲಭಾಷೆ | 150 ಅಂಕಗಳು |
| ಪತ್ರಿಕೆ–3 | ಸಾಮಾನ್ಯ ಅಧ್ಯಯನ | 300 ಅಂಕಗಳು |
| ಪತ್ರಿಕೆ–4 | ಎಜುಕೇಷನ್ | 300 ಅಂಕಗಳು |
| ಪತ್ರಿಕೆ–5,6,7 ಮತ್ತು 8 | ಪಟ್ಟಿಯಲ್ಲಿರುವ ಐಚ್ಛಿಕ ವಿಷಯಗಳಲ್ಲಿ ಯಾವುದಾದರೂ ಎರಡು ವಿಷಯಗಳು. ಪ್ರತಿ ವಿಷಯದಲ್ಲಿ ಎರಡು ಪತ್ರಿಕೆಗಳಿರುತ್ತವೆ. | ಪ್ರತಿ ಪತ್ರಿಕೆಗೂ 300 ಅಂಕಗಳು |
| ಲಿಖಿತ ಪರೀಕ್ಷೆಯ ಒಟ್ಟು ಅಂಕಗಳು | | 2100 |

ಟಿಪ್ಪಣಿ:–

(1) ಮುಖ್ಯ ಪರೀಕ್ಷೆಯು ವಿವರಣಾತ್ಮಕ ಮಾದರಿಯಲ್ಲಿರುತ್ತದೆ.

(2) ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಗಳೆರಡರಲ್ಲೂ ಇರುತ್ತದೆ. ಅಭ್ಯರ್ಥಿಗಳು ಪತ್ರಿಕೆಯನ್ನು ಪೂರ್ಣವಾಗಿ ಕನ್ನಡದಲ್ಲಿ ಅಥವಾ ಆಂಗ್ಲ ಭಾಷೆಯಲ್ಲಿ ಉತ್ತರಿಸಬಹುದು.

(3) ಮುಖ್ಯ ಪರೀಕ್ಷೆಯು (ಪತ್ರಿಕೆ–1 ಕಡ್ಡಾಯ ಕನ್ನಡ ಮತ್ತು ಪತ್ರಿಕೆ–2 ಕಡ್ಡಾಯ ಆಂಗ್ಲ ಭಾಷೆ ಹೊರತುಪಡಿಸಿ) ಪದವಿ ಮಟ್ಟದ್ದಾಗಿರುತ್ತದೆ. ಪತ್ರಿಕೆ–1 ಕಡ್ಡಾಯ ಕನ್ನಡ ಮತ್ತು ಪತ್ರಿಕೆ–2 ಕಡ್ಡಾಯ ಆಂಗ್ಲ ಭಾಷೆಯ ಪತ್ರಿಕೆಗಳು ಎಸ್.ಎಸ್.ಎಲ್.ಸಿ.ಯ ಪ್ರಥಮ ಭಾಷೆಯ ಮಟ್ಟದ್ದಾಗಿರುತ್ತದೆ.

(4) ಕಡ್ಡಾಯ ಕನ್ನಡ ಮತ್ತು ಇಂಗ್ಲೀಷ್ ಪತ್ರಿಕೆಗಳಲ್ಲಿ ಪಡೆದ ಅಂಕಗಳು ಅರ್ಹತಾದಾಯಕ ಸ್ವರೂಪದ್ದಾಗಿರುತ್ತವೆ. ಅರ್ಹತೆ ಪಡೆಯಲು ಈ ಪ್ರತಿಯೊಂದು ಪತ್ರಿಕೆಯಲ್ಲಿ ಕನಿಷ್ಠ ಶೇಕಡ 30 ಮತ್ತು ಸರಾಸರಿ ಶೇಕಡ 35 ಅಂಕಗಳನ್ನು ನಿಗದಿಪಡಿಸಲಾಗಿದೆ. ಈ ಎರಡೂ ಪತ್ರಿಕೆಗಳಲ್ಲಿ ಗಳಿಸಿದ ಅಂಕಗಳನ್ನು ಅಭ್ಯರ್ಥಿಗಳ ಆಯ್ಕೆಯ ಅರ್ಹತೆಯನ್ನು ನಿಗದಿಪಡಿಸುವಲ್ಲಿ ಪರಿಗಣಿಸಲಾಗುವುದಿಲ್ಲ. ಈ ಎರಡು ಪತ್ರಿಕೆಗಳಲ್ಲಿ ನಿಗದಿತ ಅಂಕಗಳನ್ನು ಗಳಿಸದ ಅಭ್ಯರ್ಥಿಗಳು ಐಚ್ಛಿಕ ವಿಷಯಗಳಲ್ಲಿ ಎಷ್ಟೇ ಹೆಚ್ಚು ಅಂಕಗಳನ್ನು ಗಳಿಸಿದ್ದರೂ ವ್ಯಕ್ತಿತ್ವ ಪರೀಕ್ಷೆಗೆ ಅರ್ಹರಾಗುವುದಿಲ್ಲ ಹಾಗೂ ಇಂತಹ ಅಭ್ಯರ್ಥಿಗಳ ಇತರೆ ವಿಷಯಗಳಲ್ಲಿ ಪಡೆದ ಅಂಕಗಳನ್ನು ಪ್ರಕಟಿಸುವುದಿಲ್ಲ.

ಅಭ್ಯರ್ಥಿಗಳು ಆಯ್ಕೆಮಾಡಿಕೊಂಡಿರುವ ಎಲ್ಲಾ ಪತ್ರಿಕೆಗಳಿಗೆ ಕಡ್ಡಾಯವಾಗಿ ಹಾಜರಾಗಬೇಕು. ಯಾವುದೇ ಒಂದು ಪತ್ರಿಕೆಗೆ ಗೈರುಹಾಜರಾದರೂ ಸಹ ಉಳಿದ ಪತ್ರಿಕೆಗಳಲ್ಲಿ ಪಡೆದ ಅಂಕಗಳನ್ನು ಪ್ರಕಟಿಸುವುದಿಲ್ಲ ಹಾಗೂ ಉಳಿದ ಪತ್ರಿಕೆಗಳಲ್ಲಿ ಎಷ್ಟೇ ಅಂಕಗಳನ್ನು ಗಳಿಸಿದ್ದರೂ ಸಹ ವ್ಯಕ್ತಿತ್ವ ಪರೀಕ್ಷೆಗೆ ಅರ್ಹರಾಗುವುದಿಲ್ಲ.

- ♦ ವ್ಯಕ್ತಿತ್ವ ಪರೀಕ್ಷೆ:– ಆಯೋಗವು ನಿಯಮಾನುಸಾರ ನಡೆಸುವ ಮುಖ್ಯ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಜೇಷ್ಠತೆ ಮತ್ತು ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಗಳನುಸಾರ ಇರುವ ಮೀಸಲಾತಿಯನ್ವಯ ಪ್ರಕಟಿಸಲಾದ ಖಾಲಿ ಹುದ್ದೆಗಳ ಸಂಖ್ಯೆಗೆ ಅನುಗುಣವಾಗಿ 1:5ರ ಪ್ರಮಾಣದಲ್ಲಿ ಅಭ್ಯರ್ಥಿಗಳನ್ನು ವ್ಯಕ್ತಿತ್ವ ಪರೀಕ್ಷೆಗೆ ಪರಿಗಣಿಸಲಾಗುವುದು.
- ♦ ಅಭ್ಯರ್ಥಿಗಳ ಆಯ್ಕೆ ಪಟ್ಟಿ : ಆಯೋಗವು, ಅಭ್ಯರ್ಥಿಗಳು ಮುಖ್ಯ ಪರೀಕ್ಷೆ ಮತ್ತು ವ್ಯಕ್ತಿತ್ವ ಪರೀಕ್ಷೆಯಲ್ಲಿ ಪಡೆದ ಸರಾಸರಿ ಅಂಕಗಳ ಜೇಷ್ಠತೆಯ ಆಧಾರದ ಮೇಲೆ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿಯನ್ವಯ ಲಭ್ಯವಿರುವ ಹುದ್ದೆಗಳಲ್ಲಿ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಇತರೆ ಹಿಂದುಳಿದ ವರ್ಗಗಳು ಮತ್ತು ಇತರರಿಂದ ಆಯ್ಕೆ ಮಾಡಲಾಗುವುದು.

ಮುಖ್ಯ ಪರೀಕ್ಷೆಗೆ ನಿಗದಿಪಡಿಸಿರುವ ಐಚ್ಛಿಕ ವಿಷಯಗಳು:– **(Main examination)**

| | | | | | |
|---|---|---|---|---|---|
| **1** | **Agriculture, Agricultural Marketing,Co-operation & Sericulture** | **11** | **Law** | **21** | **Sociology** |
| **2** | **Animal Husbandry and Veterinary Sciences and Fisheries** | **12** | **Mathematics** | **22** | **Statistics** |
| **3** | **Botany** | **13** | **History** | **23** | **Zoology** |
| **4** | **Chemistry** | **14** | **Mechanical Engineering** | **24** | **Rural Development & Co-operation** |
| **5** | **Civil Engineering** | **15** | **Philosophy** | **25** | **Hindi** |
| **6** | **Commerce** | **16** | **Geology** | **26** | **Anthropology** |
| **7** | **Criminology** | **17** | **Physics** | **27** | **Urdu** |
| **8** | **Economics** | **18** | **Political Sc. & International Relations** | **28** | **Kannada** |
| **8A** | **Education** | **19** | **Psychology** | **29** | **English** |
| **9** | **Electrical Engineering** | **20** | **Public Administration** | **30** | **Management.** |
| **10** | **Geography** | | | | |

ಮುಖ್ಯ ಪರೀಕ್ಷೆಯ ಪಠ್ಯಕ್ರಮ ಹಾಗೂ ಹೆಚ್ಚಿನ ವಿವರಗಳಿಗೆ ಆಯೋಗದ ಅಂತರ್ಜಾಲವನ್ನು ನೋಡಬಹುದು.

8. ಶೈಕ್ಷಣಿಕ ವಿದ್ಯಾರ್ಹತೆ :–

(1) ಭಾರತದಲ್ಲಿ ಕಾನೂನು ರೀತ್ಯಾ ಸ್ಥಾಪಿತವಾದ ಯಾವುದೇ ವಿಶ್ವವಿದ್ಯಾಲಯದ ಪದವಿ/ಸ್ನಾತಕೋತ್ತರ ಪದವಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು. ಅಥವಾ ಸರ್ಕಾರವು ಅಂತಹ ಪರೀಕ್ಷೆಗೆ ಸಮಾನವೆಂದು ಅಂಗೀಕರಿಸಿದ ವಿದ್ಯಾರ್ಹತೆಯನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗಾಗಿ ಹೊಂದಿರಬೇಕು ಮತ್ತು

(2) ಭಾರತದಲ್ಲಿ ಕಾನೂನು ರೀತ್ಯಾ ಸ್ಥಾಪಿತವಾದ ಯಾವುದೇ ವಿಶ್ವವಿದ್ಯಾಲಯದಿಂದ' ಶಿಕ್ಷಣ ಪದವಿ**(B.Ed.)** ಅಥವಾ ಸರ್ಕಾರವು ಅಂತಹ ಪದವಿಗೆ ಸಮಾನವೆಂದು ಅಂಗೀಕರಿಸಿದ ವಿದ್ಯಾರ್ಹತೆಯನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಹೊಂದಿರಬೇಕು.

9. **ವಯೋಮಿತಿ**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

**ಗರಿಷ್ಠ ವಯೋಮಿತಿ:**

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| 2ಎ, 2ಬಿ, 3ಎ, 3ಬಿ | 38 ವರ್ಷ |
| ಪ.ಜಾ/ಪ.ಪಂ/ಪ್ರ–1 | 40 ವರ್ಷ |

- ಅಂಗವಿಕಲರು ಮತ್ತು ವಿಧವೆಯರಿಗೆ ವಯೋಮಿತಿಯಲ್ಲಿ 10 ವರ್ಷಗಳ ಸಡಿಲಿಕೆಯುಂಟು. ವಿಧವೆಯರು ವಿಧವೆ ಎಂಬ ಬಗ್ಗೆ ತಹಸೀಲ್ದಾರರಿಂದ ಪಡೆದ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.
- ಅಭ್ಯರ್ಥಿಗಳು ಮಾಜಿ ಸೈನಿಕರಾಗಿದ್ದಲ್ಲಿ ಅವರು ಸೈನ್ಯದಲ್ಲಿ ಸೇವೆ ಸಲ್ಲಿಸಿದ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರಣೆ:–** (1) ಮಾಜಿ ಸೈನಿಕ ಎಂದರೆ ಕೇಂದ್ರ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯು ದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ, ಆದರೆ ಡಿಫೆನ್ಸ್ ಸೆಕ್ಯೂರಿಟಿ ಕೋರ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್, ಲೋಕ ಸಹಾಯಕ ಸೇನಾ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ; ಮತ್ತು

(2) ಕೇಂದ್ರ ಸಶಸ್ತ್ರ ದಳಗಳಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ.

(ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಲ್ಲಿ ಬಿಡುಗಡೆಯಾದವನು

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ

**ಅಥವಾ**

(ಈ) ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು.

1. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.
2. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.
3. ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು

**ವಿವರಣೆ:–** ಕೇಂದ್ರ ಸಶಸ್ತ್ರದಳಗಳಲ್ಲಿ ಸೇವೆಯಲ್ಲಿರುವ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ನಿರ್ದಿಷ್ಟ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್

ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

ಜನ್ಮ ದಿನಾಂಕಕ್ಕಾಗಿ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪ್ರಮಾಣ ಪತ್ರ, ವರ್ಗಾವಣೆ ಪ್ರಮಾಣ ಪತ್ರ (ಟಿ..ಸಿ./ಕ್ಯುಮುಲೇಟಿವ್ ರೆಕಾರ್ಡ್)ದಲ್ಲಿ ನಮೂದಿಸಿರುವಂತೆ ಜನ್ಮ ದಿನಾಂಕವನ್ನು ಆಯೋಗವು ಒಪ್ಪಿಕೊಳ್ಳುವುದು. ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

10. **ಜಾತಿ ಮೀಸಲಾತಿ ಪ್ರಮಾಣ ಪತ್ರಗಳು :–**

ಜಾತಿ ಮೀಸಲಾತಿ ಕೋರಬಯಸುವ

- ಎಸ್‌ಸಿ/ಎಸ್‌ಟಿ ಅಭ್ಯರ್ಥಿಗಳು **ನಮೂನೆ 'ಡಿ'** ರಲ್ಲಿ,
- ಪ್ರವರ್ಗ–1ರ ಅಭ್ಯರ್ಥಿಗಳು **ನಮೂನೆ 'ಇ'** ರಲ್ಲಿ ಹಾಗೂ
- (2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು **ನಮೂನೆ 'ಎಫ್'** ರಲ್ಲಿ ಸಂಬಂಧಿತ ತಹಶೀಲ್ದಾರ್‌ರವರಿಂದ ಅರ್ಜಿ ಸಲ್ಲಿಸುವ ದಿನಾಂಕದಂದು ಚಾಲ್ತಿಯಲ್ಲಿರುವ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಹಾಗೂ ಆಯೋಗವು ಪರಿಶೀಲನೆಗಾಗಿ ಕೇಳಿದಾಗ ಮೂಲ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು. **(ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅರ್ಜಿಯೊಂದಿಗೆ ನೀಡಲಾಗುವ ಮಾಹಿತಿ ಪುಸ್ತಕದ ಅನುಬಂಧ–1ರಲ್ಲಿ ತೋರಿಸಲಾಗಿದೆ).**

11. **ಗ್ರಾಮೀಣ ಅಭ್ಯರ್ಥಿ :–**

ಗ್ರಾಮೀಣ ಅಭ್ಯರ್ಥಿಗಳಿಗಿರುವ ಹುದ್ದೆಗಳ ಮೀಸಲಾತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ–2 ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಶಾಲಾ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಮೇಲುಸಹಿ ಮತ್ತು ಮೊಹರಿನೊಂದಿಗೆ ಪಡೆದಿಟ್ಟುಕೊಂಡಿರತಕ್ಕದ್ದು. ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ–2 ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ–1ರಲ್ಲಿ ಮೇಲುಸ್ತರಕ್ಕೆ ಸೇರದಿರುವ ಬಗ್ಗೆ ಪ್ರಮಾಣ ಪತ್ರವನ್ನು ತಹಶೀಲ್ದಾರ್ ರವರಿಂದ ಪಡೆದಿಟ್ಟುಕೊಂಡಿರತಕ್ಕದ್ದು.

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ, (ನಮೂನೆ–1ನ್ನು ಲಗತ್ತಿಸದಿದ್ದಲ್ಲಿ) ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ. (ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅರ್ಜಿಯೊಂದಿಗೆ ನೀಡಲಾಗುವ ಮಾಹಿತಿ ಪುಸ್ತಕದ ಅನುಬಂಧ–1ರಲ್ಲಿ ತೋರಿಸಲಾಗಿದೆ).

12. **ಕನ್ನಡ ಮಾಧ್ಯಮ ಅಭ್ಯರ್ಥಿ:**

ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರು ಪಡೆದ ಪ್ರಮಾಣ ಪತ್ರವನ್ನು ತೆಗೆದಿಟ್ಟುಕೊಂಡಿರತಕ್ಕದ್ದು (ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅರ್ಜಿಯೊಂದಿಗೆ ನೀಡಲಾಗುವ ಮಾಹಿತಿ ಪುಸ್ತಕದ ಅನುಬಂಧ–1ರಲ್ಲಿ ತೋರಿಸಲಾಗಿದೆ).

13. **ಅಂಗವಿಕಲ ಅಭ್ಯರ್ಥಿ:–**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ 03–09–2005 ರಲ್ಲಿ ರಾಜ್ಯ ಸಿವಿಲ್ ಸೇವೆಗಳ ಸಮೂಹ–' ಎ ' ಮತ್ತು ' ಬಿ ' ಗುಂಪಿನ ಹುದ್ದೆಗಳಿಗೆ ಶೇಕಡ 3 ರಷ್ಟು ಹುದ್ದೆಗಳನ್ನು ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಿರಿಸಿದೆ. (ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 104 ಎಸ್‌ಆರ್‌ಆರ್ 2005 ದಿನಾಂಕ 13–09–2005ರ ಅನುಸೂಚಿಯಡಿ ಸೇರ್ಪಡೆ ಮಾಡಲಾಗಿರುವ ಇಲಾಖೆಗಳು) ಅಂಗವಿಕಲ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 104 ಸೆನೆನಿ 2005, ದಿನಾಂಕ:13/09/2005ರಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ:115 ಸೆನೆನಿ 2005, ದಿನಾಂಕ: 19/11/2005ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪಡೆದ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗಿರುವುದಿಲ್ಲ. (ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅರ್ಜಿಯೊಂದಿಗೆ ನೀಡಲಾಗುವ ಮಾಹಿತಿ ಪುಸ್ತಕದ ಅನುಬಂಧ–1ರಲ್ಲಿ ತೋರಿಸಲಾಗಿದೆ).

14. **ಪರೀಕ್ಷಾ ಶುಲ್ಕ ಮತ್ತು ಅದನ್ನು ಪಾವತಿ ಮಾಡುವ ರೀತಿ ಹಾಗೂ ಭರ್ತಿ ಮಾಡಿದ ಅರ್ಜಿ ಸಲ್ಲಿಸಬೇಕಾದ ಸ್ಥಳದ ವಿವರ:**

14.1 ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಪ್ರವರ್ಗ–1 ಹಾಗೂ ಮಾಜಿ ಸೈನಿಕ ಅಭ್ಯರ್ಥಿಗಳಿಗೆ ರೂ.100/–. ಇತರರಿಗೆ ರೂ.300/–

14.2 ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ಇದೇ ಅಧಿಸೂಚನೆಯ ಕಂಡಿಕೆ 3 ರಲ್ಲಿ ಸೂಚಿಸಿರುವ ಆಯೋಗದ ಕೇಂದ್ರ ಕಛೇರಿ ಅಥವಾ ಪ್ರಾಂತೀಯ ಕಛೇರಿಗಳಲ್ಲಿ ಅಥವಾ ಅಂಚೆ ಕಛೇರಿಗಳಲ್ಲಿ ನಿಗದಿತ ಪರೀಕ್ಷಾ ಶುಲ್ಕವನ್ನು ಪಾವತಿಸಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಸಲ್ಲಿಸತಕ್ಕದ್ದು.

14.3 ಒಮ್ಮೆ ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ಆಯೋಗವು ನಡೆಸುವ ಇತರೆ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

14.4 **ಯಾವುದೇ ಅಭ್ಯರ್ಥಿಗಳು ನಿಗದಿತ ಶುಲ್ಕವನ್ನು ಪಾವತಿಸದಿದ್ದಲ್ಲಿ ಅಂತಹವರ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

15. ಪ್ರಾಮುಖ್ಯವಾದ ಸೂಚನೆಗಳು:–

ಅಭ್ಯರ್ಥಿಗಳು ಯಾವುದೇ ಪ್ರಮಾಣ ಪತ್ರಗಳನ್ನು ಅರ್ಜಿಯೊಂದಿಗೆ ಲಗತ್ತಿಸಕೂಡದು. ಆದರೆ ಕೆಳಕಂಡ ಪ್ರಮಾಣ ಪತ್ರಗಳನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗಾಗಿರುವಂತೆ ಪಡೆದು ತೆಗೆದಿಟ್ಟುಕೊಂಡಿದ್ದು, ಆಯೋಗವು ಸೂಚಿಸಿದಾಗ ಹಾಜರುಪಡಿಸತಕ್ಕದ್ದು.

1) ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಪ್ರಮಾಣ ಪತ್ರಗಳು (ಪದವಿ/ಸ್ನಾತಕೋತ್ತರ ಪದವಿ, ಬಿ.ಎಡ್.)
2) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆಯ ಪ್ರಮಾಣ ಪತ್ರ(ಟಿ.ಸಿ.) / ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉಧೃತ ಭಾಗ **(Extract of the Cumulative Record)**
**3)** ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ) (**Ex-servicemen)**
4) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ಮೀಸಲಾತಿ ಕೋರಿದ ಅಭ್ಯರ್ಥಿಗಳು **ನಮೂನೆ ಡಿ/ಇ/ಎಫ್** ನಲ್ಲಿ ತಹಶೀಲ್ದಾರ್‌ರಿಂದ ಪಡೆದ ಪ್ರಮಾಣ ಪತ್ರ.
5) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
6) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
7) ಅಧಿಸೂಚನೆ ಸಂಖ್ಯೆ ಸಿಆಸುಇ 104 ಸೇನೆನಿ 2005, ದಿನಾಂಕ: 13/09/2005ರ ಅನುಸಾರ ಅಂಗವಿಕಲ ಅಭ್ಯರ್ಥಿಗಳು ಕರ್ನಾಟಕ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 115 ಸೇನೆನಿ 2005, ದಿನಾಂಕ: 19/11/2005ರಲ್ಲಿ ನಿಗದಿಪಡಿಸಿದ ಪ್ರಮಾಣ ಪತ್ರ. (ಮೀಸಲಾತಿ ಕೋರಿದ್ದಲ್ಲಿ)
8) ವಿಧವಾ ಪ್ರಮಾಣ ಪತ್ರ. (ತಹಸೀಲ್ದಾರ್‌ರಿಂದ ಪಡೆದು)

**ಅಭ್ಯರ್ಥಿಗಳು ತಮ್ಮ ಅರ್ಜಿಗಳಲ್ಲಿ ನೀಡುವ ಮಾಹಿತಿಗಳ ಆಧಾರದ ಮೇಲೆ ಅವರುಗಳು ಸ್ಪರ್ಧಾತ್ಮಕ ಪೂರ್ವಭಾವಿ ಪರೀಕ್ಷೆಯನ್ನು ಬರೆಯಲು ಅರ್ಹರೆ ಎಂಬುದನ್ನು ಆಯೋಗವು ಪರಿಶೀಲಿಸಿ ಮೇಲು ನೋಟಕ್ಕೆ ಅರ್ಹರೆಂದು ಕಂಡುಬಂದ ಅಭ್ಯರ್ಥಿಗಳಿಗೆ ಮಾತ್ರ ಪ್ರವೇಶ ಪತ್ರಗಳನ್ನು ಜಾರಿ ಮಾಡುತ್ತದೆ. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಮೀಸಲಾತಿ, ಇತ್ಯಾದಿಗಳಿಗೂ ಅನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಇಲ್ಲದಿದ್ದಲ್ಲಿ ಅಥವಾ ತಪ್ಪು ಮಾಹಿತಿ ನೀಡಿದಲ್ಲಿ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

16. ಆಯೋಗದೊಡನೆ ಪತ್ರ ವ್ಯವಹಾರ

ಆಯೋಗವು ಅಭ್ಯರ್ಥಿಕೆಯ ವಿಚಾರದಲ್ಲಿ ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ. ಆದಾಗ್ಯೂ ಅಭ್ಯರ್ಥಿಗೆ ಪೂರ್ವಭಾವಿ ಪರೀಕ್ಷೆಗಾಗಿ ಪ್ರವೇಶ ಪತ್ರ ಬಾರದಿದ್ದಲ್ಲಿ, ಅಭ್ಯರ್ಥಿಯು ಆಯೋಗದ ಕಛೇರಿಯನ್ನು ಸಂಪರ್ಕಿಸತಕ್ಕದ್ದು. ಪರೀಕ್ಷಾ ಪ್ರವೇಶಕ್ಕೆ ಅನುಮತಿಸಲಾದ ಅಭ್ಯರ್ಥಿಯಾಗಿದ್ದರೆ ಪ್ರವೇಶ ಪತ್ರ ಅಥವಾ ಪ್ರವೇಶ ಪತ್ರದ ನಕಲನ್ನು ನೀಡಲಾಗುವುದು. ಪ್ರವೇಶ ಪತ್ರ ಹೊಂದಿಲ್ಲದ ಅಭ್ಯರ್ಥಿಗೆ ಪರೀಕ್ಷೆಯನ್ನು ಬರೆಯಲು ಅನುಮತಿಸುವುದಿಲ್ಲ.

ಪರೀಕ್ಷೆಯ ಪ್ರವೇಶಕ್ಕಾಗಿ ನೀಡುವ ಪ್ರವೇಶ ಪತ್ರದಲ್ಲಿ ಕೆಲವು ಅಭ್ಯರ್ಥಿಗಳ ಹೆಸರನ್ನು ತಾಂತ್ರಿಕ ಕಾರಣದಿಂದಾಗಿ ಮೊಟಕುಗೊಳಿಸಲಾಗುವುದು ಎಂಬುದನ್ನು ಅಭ್ಯರ್ಥಿಗಳು ಗಮನಿಸತಕ್ಕದ್ದು.

ಆಯೋಗದಿಂದ ನೀಡಲಾದ ಪ್ರವೇಶ ಪತ್ರವನ್ನು ಹೊಂದದ ಹೊರತು ಯಾವುದೇ ವ್ಯಕ್ತಿ ಪರೀಕ್ಷೆಗೆ ಹಾಜರಾಗುವಂತಿಲ್ಲ. ಅಭ್ಯರ್ಥಿಗೆ ಈ ಪರೀಕ್ಷೆಗೆ ಅರ್ಹತೆ ನೀಡುವ ಬಗ್ಗೆ ಆಯೋಗದ ನಿರ್ಧಾರವೇ ಅಂತಿಮವಾಗಿರುತ್ತದೆ.

ವಿಳಾಸ ಬದಲಾವಣೆ ಇದ್ದಲ್ಲಿ ಅಭ್ಯರ್ಥಿಗಳು ಲಿಖಿತ ಮನವಿಯ ಮೂಲಕ ಆಯೋಗದ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಆಯೋಗವು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ಆಯೋಗವು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು.

ಅಭ್ಯರ್ಥಿಗಳು ಆಯೋಗದೊಡನೆ ಸಂಪರ್ಕಿಸಬೇಕಾದ ಸಂದರ್ಭದಲ್ಲಿ ಅವರ ಮನವಿ ಈ ಕೆಳಕಂಡ ಮಾಹಿತಿಗಳನ್ನು ಒಳಗೊಂಡಿರಬೇಕು:–

(i) ಆಯೋಗದಿಂದ ನೀಡಲಾದ ಪ್ರವೇಶ ಪತ್ರದ ನೋಂದಣಿ ಸಂಖ್ಯೆ
(ii) ಅಭ್ಯರ್ಥಿಯ ಪೂರ್ಣ ಹೆಸರು (ಬಿಡಿ ಅಕ್ಷರಗಳಲ್ಲಿ)
(iii) ಅರ್ಜಿಯಲ್ಲಿ ನಮೂದಿಸಿರುವ ಅಂಚೆ ವಿಳಾಸ ಮತ್ತು ದೂರವಾಣಿ ಸಂಖ್ಯೆ
(iv) ಅರ್ಜಿ ಸ್ವೀಕೃತಿ ಪ್ರತಿ
(v) ಅರ್ಜಿಯ ನಕಲು ಪ್ರತಿ

17. ವಿಶೇಷ ಸೂಚನೆಗಳು

**(1) ಅಭ್ಯರ್ಥಿಗಳು ಅರ್ಜಿಗಳನ್ನು ಕಪ್ಪು ಅಥವಾ ನೀಲಿ ಬಾಲ್ ಪಾಯಿಂಟ್ ಪೆನ್ನಿನಿಂದ ಸ್ಪಷ್ಟವಾಗಿ ಆಂಗ್ಲ ಭಾಷೆಯಲ್ಲಿ (In capital letters) ದಪ್ಪ ಅಕ್ಷರಗಳಲ್ಲಿ ಭರ್ತಿ ಮಾಡತಕ್ಕದ್ದು.**

**(2) ಅಪೂರ್ಣವಾಗಿರುವ, ಫೋಟೋ ಲಗತ್ತಿಸಿಲ್ಲದ ಮತ್ತು ಸಹಿ ಮಾಡದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

**(3) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ಕಡ್ಡಾಯವಾಗಿ ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.**

**(4) ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಯಲ್ಲಿರುವ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಅವರುಗಳ ನೇಮಕಾತಿ ಪ್ರಾಧಿಕಾರಿಗಳಿಂದ ದೃಢೀಕರಿಸಿ ಸಲ್ಲಿಸತಕ್ಕದ್ದು.**

**(5) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.**

**ಅಂಧ /ದೃಷ್ಟಿಮಾಂದ್ಯ (Blindness or Low vision)** ಅಭ್ಯರ್ಥಿಗಳಿಗೆ ಆಯೋಗದ ಕೇಂದ್ರ ಕಛೇರಿ, ಬೆಂಗಳೂರಿನಲ್ಲಿ ಮಾತ್ರ ಪರೀಕ್ಷೆಯನ್ನು ಬರೆಯಲು ಅನುಮತಿ ನೀಡಲಾಗುವುದು. ಇಂತಹ ಅಭ್ಯರ್ಥಿಗಳಿಗೆ ಪರೀಕ್ಷಾ ಪದ್ಧತಿ ಕುರಿತಂತೆ ಪ್ರತ್ಯೇಕ ಸೂಚನೆಗಳನ್ನು ನೀಡಲಾಗುವುದು. ಆ ಸೂಚನೆಗಳಿಗೆ ಸದರಿ ಅಭ್ಯರ್ಥಿಗಳು ಬದ್ಧರಾಗಿರತಕ್ಕದ್ದು. ಈ ಸೂಚನೆಗಳನ್ನು ಪಾಲಿಸದ ಅಭ್ಯರ್ಥಿಗಳಿಗೆ ಪರೀಕ್ಷೆಯನ್ನು ಬರೆಯಲು ಅವಕಾಶ ನೀಡಲಾಗುವುದಿಲ್ಲ.

ಅಂಧ/ದೃಷ್ಟಿಮಾಂಧ್ಯ ಅಭ್ಯರ್ಥಿಗಳು ಆಯೋಗವು ಸೂಚಿಸುವ ವೈದ್ಯಕೀಯ ಸಮಿತಿಯ ಮುಂದೆ ಪರೀಕ್ಷೆಗೆ ಒಳಪಡಬೇಕು. ಅಂಗವಿಕಲ ಮೀಸಲಾತಿಯ ಸೌಲಭ್ಯವನ್ನು ಈ ಸಮಿತಿಯ ಅಭಿಪ್ರಾಯದ ಆಧಾರದ ಮೇಲೆ ನೀಡಲಾಗುವುದು. ಈ ವಿಷಯದಲ್ಲಿ ವೈದ್ಯಕೀಯ ಸಮಿತಿಯ ತೀರ್ಮಾನವೇ ಅಂತಿಮವಾಗಿರುತ್ತದೆ.

18. ದುರ್ನಡತೆ

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಪರೀಕ್ಷಾ ಕೊಠಡಿಯಲ್ಲಿ ದುರ್ವರ್ತಿಸುತ್ತಿರುವನೆಂಬ ಬಗ್ಗೆ ತಪ್ಪಿತಸ್ಥನೆಂದು ಕಂಡುಬಂದಲ್ಲಿ ಹಾಗೂ ಆಯೋಗದಿಂದ ನೀಡಲಾದ ಯಾವುದೇ ಸೂಚನೆಗಳನ್ನು ಉಲ್ಲಂಘಿಸುತ್ತಿರುವನೆಂದು ಅಥವಾ ಅವನು ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅವನು / ಅವಳು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ; ಆಯೋಗವು ನಡೆಸುವ ಯಾವುದೇ ಪರೀಕ್ಷೆಗೆ ಪ್ರವೇಶ ಪಡೆಯುವುದರಿಂದ ಅಥವಾ ಯಾವುದೇ ಹುದ್ದೆಯ ಆಯ್ಕೆಗೆ ಖಾಯಂ ಆಗಿ ಅಥವಾ ನಿರ್ದಿಷ್ಟ ಅವಧಿಗೆ ಡಿಬಾರ್ ಮಾಡಲಾಗುವುದು.

**ಡಾ. ಹೆಚ್. ವಿ. ಪಾರ್ಶ್ವನಾಥ್**
ಕಾರ್ಯದರ್ಶಿ
ಕರ್ನಾಟಕ ಲೋಕ ಸೇವಾ ಆಯೋಗ.

ಪಿ.ಆರ್. 687

## ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ, ಸರ್ಕಾರಿ ಕೇಂದ್ರ ಮುದ್ರಣಾಲಯ, ಪೀಣ್ಯ, ಬೆಂಗಳೂರು - 58

### ಸರ್ಕಾರಿ ಜಿಲ್ಲಾ / ವಿಭಾಗೀಯ ಮುದ್ರಣಾಲಯಗಳಲ್ಲಿ ಮುದ್ರಣಪೂರ್ವ, ಮುದ್ರಣ ಬೈಂಡಿಂಗ್ ಹಾಗೂ ಭದ್ರತಾ ಮತ್ತು ಸ್ವಚ್ಛತಾ ಕೆಲಸಗಳಿಗಾಗಿ ಟೆಂಡರ್ ಪ್ರಕಟಣೆ

**ಟೆಂಡರ್ ಅಧಿಸೂಚನೆ ಸಂಖ್ಯೆ: ಡಿಪಿಎಸ್/ ಕಾಸ್ಪ್/ ಬಿಲ್ಸ್-2/37/07-08, ದಿನಾಂಕ: 5ನೇ ನವೆಂಬರ್ 2007**

ಸರ್ಕಾರಿ ಜಿಲ್ಲಾ / ವಿಭಾಗೀಯ ಮುದ್ರಣಾಲಯ, ಧಾರವಾಡ, ಗುಲ್ಬರ್ಗಾ, ಮಂಗಳೂರು ಕೋಲಾರ, ಮತ್ತು ಶಿವಮೊಗ್ಗ ಇಲ್ಲಿ ಈ ಕೆಳಕಂಡಂತೆ 2007-08ನೇ ಸಾಲಿಗೆ ಕೆಲಸ ನಿರ್ವಹಿಸಲು ಇಚ್ಛೆಯುಳ್ಳ ಸಂಸ್ಥೆಗಳಿಂದ ದ್ವಿಲಕೋಟೆ ಪದ್ಧತಿಯಲ್ಲಿ ಟೆಂಡರ್ ಕರೆಯಲಾಗಿದೆ.

| | |
|---|---|
| **ಶೆಡ್ಯೂಲ್-1** | |
| ಮಾನವ ಶಕ್ತಿ ಏಜೆನ್ಸಿ ಆಧಾರದ ಮೇರೆಗೆ ಮುದ್ರಣ ಪೂರ್ವ, ಮುದ್ರಣ, ಬೈಂಡಿಂಗ್ ಹಾಗೂ ಇತರೆ ಕೆಲಸಗಳು | ಜಿಲ್ಲಾ ಮುದ್ರಣಾಲಯ ಮಂಗಳೂರು, ಕೋಲಾರ ಮತ್ತು ಶಿವಮೊಗ್ಗಗಳಲ್ಲಿ |
| **ಶೆಡ್ಯೂಲ್-2** | |
| ಭದ್ರತಾ ಮತ್ತು ಸ್ವಚ್ಛತಾ ಕೆಲಸಗಳು | ಜಿಲ್ಲಾ ಮುದ್ರಣಾಲಯ ಮಂಗಳೂರು, ಕೋಲಾರ ಮತ್ತು ಶಿವಮೊಗ್ಗಗಳಲ್ಲಿ ಹಾಗೂ ವಿಭಾಗೀಯ ಮುದ್ರಣಾಲಯಗಳಾದ ಧಾರವಾಡ ಮತ್ತು ಗುಲ್ಬರ್ಗಾಗಳಲ್ಲಿ |

ನಿಗದಿತ ಟೆಂಡರ್ ನಮೂನೆ ಶುಲ್ಕ ತೆರಿಗೆಗಳು ಸೇರಿದಂತೆ ರೂ 225/- (ರೂ ಎರಡು ನೂರ ಇಪ್ಪತ್ತೈದು ಮಾತ್ರ) ನಗದು ರೂಪದಲ್ಲಿ ಇಲಾಖೆಯ ನಗದು ಸಹಾಯಕರಿಗೆ ಪಾವತಿಸಿ ಟೆಂಡರ್ ಫಾರಂ ಪಡೆಯಬಹುದಾಗಿದೆ. ಎರಡೂ ಶೆಡ್ಯೂಲ್‌ಗಳಿಗೆ ಟೆಂಡರ್ ದಸ್ತಾವೇಜುಗಳು ಪ್ರತ್ಯೇಕವಾಗಿರುತ್ತದೆ.

1. ಅರ್ಜಿ ಮಾರಾಟ ಕೊನೆಯ ದಿನಾಂಕ 6.12.2007 ಸಾಯಂಕಾಲ 5.00 ಗಂಟೆಯ ವರೆಗೆ
2. ಮೊಹರಾದ ಟೆಂಡರ್ ಲಕೋಟೆ 1 ಮತ್ತು 2ನ್ನು ಸ್ವೀಕರಿಸಲು ಕೊನೆಯ ದಿನಾಂಕ 10.12.2007 ಮಧ್ಯಾಹ್ನ 3.00 ಗಂಟೆಯವರೆಗೆ
3. ಇ.ಎಂ.ಡಿ. ರೂ. 5,000/- (ರೂ ಐದು ಸಾವಿರ ರೂ.ಗಳು ಮಾತ್ರ) ಬ್ಯಾಂಕ್ ಡಿ.ಡಿ. ಮೂಲಕ "ನಿರ್ದೇಶಕರ" ಹೆಸರಿಗೆ ಪಡೆದು ಸಲ್ಲಿಸಬೇಕು. ಪ್ರತಿ ಶೆಡ್ಯೂಲಿಗೆ ಪ್ರತ್ಯೇಕ ಅರ್ಜಿ ಸಲ್ಲಿಸಬೇಕು.
4. ಮೊಹರಾದ ಲಕೋಟೆ 1ನ್ನು ದಿನಾಂಕ: 10.12.2007 ಮಧ್ಯಾಹ್ನ 3.30 ಗಂಟೆಗೆ ತೆರೆಯಲಾಗುವುದು.
5. ಅರ್ಹ ಟೆಂಡರ್‌ದಾರರ ಮೊಹರಾದ ಲಕೋಟೆ 2ನ್ನು ದಿನಾಂಕ 11.12.2007 ಮಧ್ಯಾಹ್ನ 3.00 ಗಂಟೆಗೆ ಅಥವಾ ಮುಂದೆ ತಿಳಿಸುವ ದಿನಾಂಕದಂದು ತೆರೆಯಲಾಗುವುದು.
6. ಶೆಡ್ಯೂಲ್-1ರ ವಾರ್ಷಿಕ ಅಂದಾಜು ವೆಚ್ಚ ರೂ. 13 ಲಕ್ಷಗಳು
7. ಶೆಡ್ಯೂಲ್-2ರ ವಾರ್ಷಿಕ ಅಂದಾಜು ವೆಚ್ಚ ರೂ. 9 ಲಕ್ಷಗಳು

ಹೆಚ್ಚಿನ ಮಾಹಿತಿಯನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು. ದೂರವಾಣಿ ಸಂಖ್ಯೆ: 2839 4582

ಪಿ.ಆರ್. 703 ನಿರ್ದೇಶಕರು

## ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ, ಸರ್ಕಾರಿ ಕೇಂದ್ರ ಮುದ್ರಣಾಲಯ, ಪೀಣ್ಯ, ಬೆಂಗಳೂರು - 58

### ಟೆಂಡರ್ ಪ್ರಕಟಣೆ

**ಸಂಖ್ಯೆ: ಡಿಪಿಎಸ್ / ಖರೀದಿ / ಬಿ-30 / 2007-08, ದಿನಾಂಕ: 7ನೇ ನವೆಂಬರ್ 2007**

ಈ ಕೆಳಕಂಡ ಸಾಮಗ್ರಿಗಳನ್ನು ಸರಬರಾಜು ಮಾಡಲು ತಯಾರಕರು / ಅಧಿಕೃತ ಮಾರಾಟಗಾರರಿಂದ ಕೆಟಿಪಿಪಿ ಆಕ್ಟ್ 1999ರ ಪ್ರಕಾರ ಮೊಹರಾದ ಟೆಂಡರನ್ನು ಕರೆಯಲಾಗಿದೆ.

**ಅನುಸೂಚಿ ಪಟ್ಟಿ**

| ಕ್ರ. ಸಂ. | ವಸ್ತುಗಳ ವಿವರ | Approx. Quantity | Units | Approx Total value | EMD in Rupees |
|---|---|---|---|---|---|
| | **ಅನುಸೂಚಿ - I** | | | | |
| 1. | ಕೈ ತಯಾರಿಕಾ ಕಡತದ ಕವಚಗಳು | 350000 | Nos. | | |
| 2. | ಕೈ ತಯಾರಿಕಾ ಕಡತದ ಬೋರ್ಡುಗಳು | 50000 | Nos. | 1775000 | 35000 |
| | **ಅನುಸೂಚಿ - II** | | | | |
| 3. | ಶೀಘ್ರಲಿಪಿ ಪುಸ್ತಕಗಳು (ವೈರೋ ಬೌಂಡ್) | | 10000 | Nos. | |
| 4. | ಸ್ಕ್ರಿಬ್ಲಿಂಗ್ ಪ್ಯಾಡ್ (ವೈರೋ ಬೌಂಡ್) | 10000 | Nos. | 470000 | 9000 |
| | **ಅನುಸೂಚಿ - III** | | | | |
| | ವಿವಿಧ ಲೇಖನ ಸಾಮಗ್ರಿಗಳು | | | | |
| 5. | ಸೆಲ್ಫ್ ಇಂಕ್ ಪ್ಯಾಡ್ ಕೋರಸ್ ಬ್ರಾಂಡ್ ಕ್ಯಾಸೆಟ್ ಟೈಪ್ | 500 | Nos. | | |
| 6. | ಡಬಲ್ ಹೋಲ್ ಪಂಚಿಂಗ್ ಮೆಷಿನ್ ಕಾಂಗ್ರೋ ಬ್ರಾಂಡ್ | 3500 | Nos. | | |

| ಕ್ರ. ಸಂ. | ವಸ್ತುಗಳ ವಿವರ | Approx. Quantity | Units | Approx Total value | EMD in Rupees |
|---|---|---|---|---|---|
| 7. | ಸಿಲ್ವಾ ಬ್ಲಾಕ್ ಕಾರ್ಬನ್ ಪೇಪರ್ ಅಥವಾ ತತ್ಸಮಾನ ಐ.ಎಸ್.ಐ. ಮಾರ್ಕ್ | 400 | Reems | 330000 | 7000 |
| | **ಅನುಸೂಚಿ - IV** | | | | |
| 8. | ಪಿ.ಎಸ್. ಪ್ಲೇಟ್ಸ್ ಹೆಚ್.ಎಂ.ಟಿ. ಆಫ್‌ಸೆಟ್ ಯಂತ್ರಕ್ಕೆ ಲಾಂಗ್‌ರನ್ | 2500 | Nos | | |
| 9. | ಪಿ.ಎಸ್. ಪ್ಲೇಟ್ಸ್ ಪ್ಲಾನೆಟಾ ಆಫ್‌ಸೆಟ್ ಯಂತ್ರಕ್ಕೆ ಲಾಂಗ್‌ರನ್ | 1500 | Nos | | |
| 10. | ಪಿ.ಎಸ್. ಪ್ಲೇಟ್ಸ್ ಪ್ಲಾನೆಟಾ ಆಫ್‌ಸೆಟ್ ಯಂತ್ರಕ್ಕೆ ಶಾರ್ಟ್‌ರನ್ | 1500 | Nos | 13,85,980 | 28000 |

ಟೆಂಡರ್ ದಸ್ತಾವೇಜನ್ನು ದಿನಾಂಕ: 07.11.2007 ರಿಂದ 06.12.2007ರ ವರೆಗೆ ಮೇಲ್ಕಂಡ ಕಛೇರಿಯಲ್ಲಿ ರೂ. 800/- ಮತ್ತು ವ್ಯಾಟ್ ಶೇಕಡಾ 12.5 ರಂತೆ ರೂ. 100/- ನ್ನು ಈ ಕಛೇರಿಯ ನಗದು ವಿಭಾಗದಲ್ಲಿ ಕಛೇರಿಯ ವೇಳೆಯಲ್ಲಿ ತುಂಬಿ ಪಡೆಯಬಹುದಾಗಿದೆ.

ಟೆಂಡರ್ ದಸ್ತಾವೇಜನ್ನು ನೀಡಲು ಕೊನೆಯ ದಿನಾಂಕ: 07.12.2007 ಮಧ್ಯಾಹ್ನ 3.00 ಗಂಟೆಗೆ ಹೆಚ್ಚಿನ ವಿವರಗಳಿಗಾಗಿ ಕಛೇರಿ ವೇಳೆಯಲ್ಲಿ ಈ ಕಛೇರಿಯನ್ನು ಸಂಪರ್ಕಿಸಬಹುದಾಗಿದೆ.

ಪಿ.ಆರ್. 707 ನಿರ್ದೇಶಕರು

**ಲೋಕೋಪಯೋಗಿ ಇಲಾಖೆ**

**ಕೋಲಾರ ವಿಭಾಗ, ಕೋಲಾರ**

**ಟೆಂಡರ್ ಅಧಿಸೂಚನಾ ಸಂಖ್ಯೆ: 41:2007-08, ದಿನಾಂಕ: 22ನೇ ಅಕ್ಟೋಬರ್ 2007**

**ಬಾಬುವಾರು ದರದ ಟೆಂಡರುಗಳಿಗಾಗಿ ಅರ್ಜಿ ಆಹ್ವಾನ (1ನೇ ಕರೆ)**

ಈ ಕೆಳಗೆ ತಿಳಿಸಿದ ಕಾಮಗಾರಿಗಾಗಿ ನಿರ್ಧಿಷ್ಟಪಡಿಸಿದ ನಮೂನೆಗಳನ್ನು ನೊಂದಾಯಿತ ಕರಾರುದಾರರಿಂದ ದ್ವಿಪ್ರತಿಗಳಲ್ಲಿ ಮೊಹರು ಮಾಡಲಾದ ಟೆಂಡರ್‌ಗಳನ್ನು ಕರ್ನಾಟಕ ರಾಜ್ಯಪಾಲರ ಹೆಸರಿನಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ 2000 ರ ಅನ್ವಯ ಈ ಕೆಳಗೆ ಸಹಿ ಮಾಡಿದವರು ಕರೆದಿರುತ್ತಾರೆ. ಅವುಗಳನ್ನು ಈ ಕೆಳಗೆ ಸಹಿ ಮಾಡಿದವರು ತಮ್ಮ ಕಛೇರಿಯಲ್ಲಿ ಆ ಕಾಮಗಾರಿ ಪ್ರತಿಯೊಂದು ಕಾಮಗಾರಿಯೆದುರು ನಮೂದಿಸಿದ ದಿನಾಂಕಗಳಂದು ಸಂಜೆ 4-00 ಗಂಟೆಯವರೆಗೆ ಸ್ವೀಕರಿಸುತ್ತಾರೆ. ಆ ಟೆಂಡರುಗಳನ್ನು ಈ ಕೆಳಗೆ ಸಹಿ ಮಾಡಿರುವವರ ಕಚೇರಿಯಲ್ಲಿ ದಿನಾಂಕ: 03.12.2007 ರಂದು ಸಂಜೆ 4-30 ಗಂಟೆಗೆ ಸಾಧ್ಯವಾದರೆ ತೆರೆಯಲಾಗುವುದು.

ಕಾಮಗಾರಿಗೆ : ಪ್ರತಿಯೊಂದು ಕಾಮಗಾರಿಗೆ ಸಂಬಂಧಿಸಿದ ಮುದ್ರಿತ ಕರಾರು ದಸ್ತಾವೇಜುಗಳು ಅಂದರೆ ರೇಖಾ ಚಿತ್ರಗಳು ಪೂರ್ಣ ತಂಡ ಮಾಡಬೇಕಾದ ಕಾಮಗಾರಿಗಳ ಪೂರ್ಣ ತಪಶೀಲು ಮಾಡಬೇಕಾದ ಕಾಮಗಾರಿಗಳ ವಿವಿಧ ವರ್ಗಗಳ ಪರಿಮಾಣದ ಷೆಡ್ಯೂಲ್ ಅಗತ್ಯವಿರುವಲ್ಲಿ ಕಲ್ಲುಗಣಿ ಚಾರ್ಟುಗಳು ಮತ್ತು ಯಾರ ಟೆಂಡರು ಸ್ವೀಕೃತವಾಗುತ್ತದೋ ಆ ವ್ಯಕ್ತಿಯು ಮಾಡಬೇಕಾದ ಕರಾಗಿನ ಷರತ್ತುಗಳು ಇವುಗಳನ್ನು ಅದಕ್ಕಾಗಿ ಅರ್ಜಿ ಸಲ್ಲಿಸಿ ಟೆಂಡರ್ ದಾಖಲೆಗಳ ಬಿಲ್ಲನ್ನು ಸಂದಾಯ ಮಾಡಿದ ತರುವಾಯ ಅವುಗಳಲ್ಲಿ ಕಾಮಗಾರಿಯ ಎದುರು ಹೇಳಲಾದ ದಿನಾಂಕದಂದು ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ಖರೀದಿಸಬಹುದು. ಇದಲ್ಲದೇ ಕರಾರುದಾರರು ಸಧ್ಯದಲ್ಲಿ ತಾವು ಕಾರ್ಯನಿರ್ವಹಿಸುತ್ತಿರುವಂತಹ ಕಾಮಗಾರಿಗಳ ಒಂದು ಪಟ್ಟಿಯನ್ನು ಈ ಕೆಳಗೆ ಸಹಿ ಹಾಕಿದವರ ಮಾಹಿತಿಗಾಗಿ ಸಲ್ಲಿಸಬೇಕೆಂದು ಕೋರಲಾಗಿದೆ.

ಟೆಂಡರು ಸಲ್ಲಿಸಬಯಸುವ ಕರಾರುದಾರರ ಟೆಂಡರ್ ಸೂಚನೆ (ಭಾಗ-1 ಪಿಡಬ್ಲ್ಯೂಜಿ 66) ರಲ್ಲಿ ಒಳಗೊಂಡ ವಿವರವಾದ ಸೂಚನೆಗಳು ಮತ್ತು ಷರತ್ತುಗಳನ್ನು ತಪ್ಪದೇ ಪಾಲಿಸಬೇಕೆಂಬುದನ್ನು ಗಮನಿಸಬೇಕು. ಇದರ ನೋಟೀಸು ಅವರು ಕೊಂಡುಕೊಳ್ಳುವ ಟೆಂಡರ್ ದಾಖಲೆಗಳ ಒಂದು ಭಾಗವಾಗಿರುತ್ತದೆ. ಸಂಚಕಾರ ಠೇವಣಿಯ ಮೊಬಲಗು, ನಮೂನೆ ಹಾಗೂ ಸಿಂಧುತ್ವ ಅವಧಿಯ ಸಂಬಂಧಪಟ್ಟ ವಿವರಗಳು ಟೆಂಡರ್‌ಗಳನ್ನು ಸಲ್ಲಿಸುವಾಗ ಮತ್ತು ಟೆಂಡರು ದಸ್ತಾವೇಜುಗಳನ್ನು ಭರ್ತಿ ಮಾಡುವಾಗ ಕರಾರುದಾರರು ಅನುಸರಿಸಬೇಕಾದ ಕಾರ್ಯವಿಧಾನ, ನೀಡಿಕೆ ಆಹ್ವಾನದ ಅವಧಿಯ ಸಿಂಧುತ್ವ, ಟೆಂಡರುಗಳನ್ನು ತೆಗೆಯುವುದು, ತಪ್ಪುಗಳನ್ನು ದೋಷಗಳನ್ನು ಸರಿಪಡಿಸುವಿಕೆ ಕೆಲವು ಸಂದರ್ಭಗಳಲ್ಲಿ ಮೌಲ್ಯ ನಿರ್ಧರಣೆ ಪದ್ಧತಿ, ಕರಾರುದಾರರು ಬಾಕಿದಾರರಾದಾಗ ಪರಿಣಾಮಗಳು ಯಶಸ್ವಿ ಟೆಂಡರುದಾರರಿಂದ ಸಂದಾಯ ಮಾಡಬೇಕಾದ ಭದ್ರತಾ ಠೇವಣಿ ಬೆಲೆ ಹೊಂದಾಣಿಕೆ ಇತ್ಯಾದಿಗಳು ಸಹಾ ಟೆಂಡರು ಸೂಚನೆ (ಭಾಗ-1 ಪಿಡಬ್ಲ್ಯೂಜಿ 66) ರಲ್ಲಿ ಲಭ್ಯವಿರುತ್ತದೆ.

ಕರಾರುದಾರರಿಗೆ ಹೆಚ್ಚಿನ ವಿವರಗಳೇನಾದರೂ ಅಗತ್ಯವಿದ್ದಲ್ಲಿ ಅದನ್ನು ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳ ಕಛೇರಿಯಿಂದ ನಮೂದಿಸಿರುವ ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ಪಡೆದುಕೊಳ್ಳಬಹುದು. ಈ ಕೆಳಗೆ ನಮೂದಿಸಲಾದ ಯಾವುದೇ ದಿನಾಂಕಗಳು ಸಾರ್ವತ್ರಿಕ ರಜಾ ದಿನಗಳಾಗಿರುವಲ್ಲಿ ಆ ದಿನಾಂಕಕ್ಕೆ ಬದಲಾಗಿ ಮುಂದಿನ ಕೆಲಸದ ದಿನವನ್ನು ಪರಿಗಣಿಸಲಾಗುವುದೆಂದು ಸೂಚಿಸಲಾಗಿದೆ.

**ಸೂಚನೆ:**

1) ಇ.ಎಂ.ಡಿ.ಯನ್ನು ಕರ್ನಾಟಕ ಸರ್ಕಾರದ ಟ್ರೆಜರಿ ಚಲನ್, ಡಿಮ್ಯಾಂಡ್ ಡ್ರಾಫ್ಟ್, ನ್ಯಾಷನಲ್ ಸೇವಿಂಗ್ಸ್ ಸರ್ಟಿಫಿಕೇಟ್ ರೂಪದಲ್ಲಿ ಸೂಚಿಸಿರುವ ಹಣಕ್ಕೆ ತಕ್ಕಂತೆ ಕಾರ್ಯನಿರ್ವಾಹಕ ಇಂಜಿನಿಯರ್, ಕೋಲಾರ ವಿಭಾಗ, ಸಂಪರ್ಕ ಮತ್ತು ಕಟ್ಟಡಗಳು, ಕೋಲಾರ, ಇವರ ಹೆಸರಿನಲ್ಲಿ ಪಾವತಿ ಮಾಡುವುದು.
2) ಯಾವುದೇ ನಿಬಂಧನೆಗಳನ್ನೊಳಗೊಂಡ ಟೆಂಡರುಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ.
3) ಶೇವಣೆ ಕ್ರಮಬದ್ಧತೆಯ (ವ್ಯಾಲಿಡಿಟಿ ಪೀರಿಯಡ್) ತೊಂಬತ್ತು ದಿವಸಗಳ ಅವಧಿಯನ್ನು ಒಳಗೊಂಡಿರಬೇಕಾಗಿರುತ್ತದೆ.
4) ಅಂದಾಜು ಮೊತ್ತ ಹೆಚ್ಚುವರಿಯಾದಲ್ಲಿ ಇ.ಎಂ.ಡಿ. ವ್ಯತ್ಯಾಸದ ಮೊತ್ತವನ್ನು ಯಶಸ್ವಿ ಟೆಂಡರುದಾರರು ಕರಾರು ಮುಚ್ಚಳಿಕೆ ಸಮಯದಲ್ಲಿ ಪಾವತಿ ಮಾಡಬೇಕು.

| ಕ್ರ. ಸಂ. | ಕೆಲಸದ ಹೆಸರು | ಟೆಂಡರ್ ಗಿಟ್ಟ ಮೊತ್ತ ರೂ. ಲಕ್ಷಗಳಲ್ಲಿ | ಇ.ಎಂ.ಡಿ. ರೂ. | ಟೆಂಡರ್ ದಾಖಲೆಗಳ ವೆಚ್ಚ (ಈ ಹಣವನ್ನು ಹಿಂದಿರುಗಿಸುವುದಿಲ್ಲ ಹಾಗೂ ವರ್ಗಾಯಿಸುವುದಿಲ್ಲ) | ಕರಾರುದಾರರ ವರ್ಗ | ಕಾಮಗಾರಿಯನ್ನು ಪೂರ್ಣಗೊಳಿಸಲು ಗೊತ್ತುಪಡಿಸಲಾದ ಕಾಲಾವಧಿ ಮಳೆಗಾಲ ಸೇರಿ ಒಟ್ಟು | ಸಂಜೆ 5-30 ವರೆಗೆ ಅರ್ಜಿ ಸ್ವೀಕಾರ ಹಾಗೂ ದಾಖಲೆಗಳನ್ನು ನೀಡುವ ಕಡೆಯ ದಿನಾಂಕ | ಸಂಜೆ 4-00 ಗಂಟೆವರೆಗೆ ಟೆಂಡರ್‌ಗಳನ್ನು ಸ್ವೀಕರಿಸುವ ಕಡೆಯ ದಿನಾಂಕ |
|---|---|---|---|---|---|---|---|---|
| 1. | ಕೋಲಾರ ಜಿಲ್ಲೆ, ಮಾಲೂರುನಲ್ಲಿ ಐ.ಬಿ. ಕಟ್ಟಡ ನಿರ್ಮಾಣ ಕಾಮಗಾರಿ | 49.90 | 49900.00 | ರೂ. 5000.00 ಎಲ್ಲಾ ತೆರಿಗೆಗಳು ಸೇರಿ | 1ನೇ ದರ್ಜೆ | 12 ತಿಂಗಳು | 23.10.2007 ರಿಂದ 29.11.2007 | 03.12.2007 |
| 2. | ಕೋಲಾರ ಜಿಲ್ಲೆ, ಮಾಲೂರುನಲ್ಲಿ ಪ್ರಥಮದರ್ಜೆ ಕಾಲೇಜು ಕಟ್ಟಡ ನಿರ್ಮಾಣ ಕಾಮಗಾರಿ | 49.90 | 49900.00 | ರೂ. 5000.00 ಎಲ್ಲಾ ತೆರಿಗೆಗಳು ಸೇರಿ | 1ನೇ ದರ್ಜೆ | 12 ತಿಂಗಳು | 23.10.2007 ರಿಂದ 29.11.2007 | 03.12.2007 |
| 3. | ಕೋಲಾರ ಜಿಲ್ಲೆ ಕೋಲಾರ ನಗರದಲ್ಲಿ 2 ಸಂಖ್ಯೆ ಲೋ.ಇ. ಸಹಾಯಕ ಇಂಜಿನಿಯರ್ ರವರ ನಾಮನಿರ್ದೇಶಿತ ವಸತಿಗೃಹ ನಿರ್ಮಾಣ ಕಾಮಗಾರಿ | 40.00 | 40000.00 | ರೂ. 4000.00 ಎಲ್ಲಾ ತೆರಿಗೆಗಳು ಸೇರಿ | 1ನೇ ದರ್ಜೆ | 12 ತಿಂಗಳು | 23.10.2007 ರಿಂದ 29.11.2007 | 03.12.2007 |
| 4. | ಕೋಲಾರ ಜಿಲ್ಲೆ, ಕೋಲಾರ ನಗರದಲ್ಲಿ 2 ಸಂಖ್ಯೆ ಲೋ.ಇ. ಪ್ರಥಮ ದರ್ಜೆ ಸಹಾಯಕರ ನಾಮನಿರ್ದೇಶಿತ ವಸತಿಗೃಹ ನಿರ್ಮಾಣ ಕಾಮಗಾರಿ | 30.00 | 30000.00 | ರೂ. 3000.00 ಎಲ್ಲಾ ತೆರಿಗೆಗಳು ಸೇರಿ | 1ನೇ ದರ್ಜೆ | 12 ತಿಂಗಳು | 23.10.2007 ರಿಂದ 29.11.2007 | 03.12.2007 |
| 5. | ಕೋಲಾರ ಜಿಲ್ಲೆ, ಬಂಗಾರುಪೇಟೆ ತಾ. ಕೆ.ಜಿ.ಎಫ್. ನಲ್ಲಿ ಸಹಾಯಕ ಇಂಜಿನಿಯರ್ ನಾಮನಿರ್ದೇಶಿತ ವಸತಿಗೃಹ ನಿರ್ಮಾಣ ಕಾಮಗಾರಿ | 20.00 | 30000.00 | ರೂ. 2000.00 ಎಲ್ಲಾ ತೆರಿಗೆಗಳು ಸೇರಿ | 2ನೇ ದರ್ಜೆ | 12 ತಿಂಗಳು | 23.10.2007 ರಿಂದ 29.11.2007 | 03.12.2007 |

**ಭರ್ತಿ ಮಾಡಿದ ಟೆಂಡರುಗಳೊಂದಿಗೆ ಗುತ್ತಿಗೆದಾರರು ಸಲ್ಲಿಸಬೇಕಾಗಿರುವ ದಾಖಲೆಗಳು**

1. ಈ ಮೇಲಿನ ಕಟ್ಟಡ ಕಾಮಗಾರಿಯ ಮಾದರಿಯ ಒಂದು ಕಾಮಗಾರಿಯನ್ನು ಟೆಂಡರ್‌ಗೆ ಹಾಕಿರುವ ಮೌಲ್ಯಕ್ಕೆ ಶೇಕಡ 30% ಕಡಿಮೆ ಇರದ ಮೌಲ್ಯದ ಕಾಮಗಾರಿಯನ್ನು ಕಳೆದ 5 ವರ್ಷಗಳ ಅವಧಿಯಲ್ಲಿ ಒಂದು ಆರ್ಥಿಕ ವರ್ಷದ ಅವಧಿಯಲ್ಲಿ ತೃಪ್ತಿಕರವಾಗಿ ಪೂರೈಸಿರುವುದರ ಬಗ್ಗೆ ಕಾರ್ಯನಿರ್ವಾಹಕ ಇಂಜಿನೀಯರ್ ದರ್ಜೆಗೆ ಕಡಿಮೆಯಿರದ ಅಧಿಕಾರಯುಕ್ತ ಪ್ರಾಧಿಕಾರದಿಂದ ಪಡೆದ ಯೋಗ್ಯತಾ ಪತ್ರವನ್ನು ಗುತ್ತಿಗೆದಾರರ ಟೆಂಡರ್ ಜೊತೆಗೆ ಹಾಜರುಪಡಿಸಬೇಕು, ಹಾಗೆ ಮಾಡಲು ವಿಫಲರಾದಲ್ಲಿ ಅಂತಹ ಟೆಂಡರನ್ನು ತಿರಸ್ಕರಿಸಲಾಗುವುದು.
2. ನಿಗದಿತ ಇ.ಎಂ.ಡಿ. ಯನ್ನು ಈ ಕೆಳಗೆ ಸೂಚಿಸಿರುವವರಿಗೆ ಡಿಮ್ಯಾಂಡ್ ಡ್ರಾಫ್ಟ್ ದ್ವಿಪ್ರತಿಯಲ್ಲಿ ಟ್ರೆಜರಿ ಚಲನನ್ನು ಅಥವಾ ಎನ್.ಎಸ್.ಸಿ. ಬ್ಯಾಂಕ್ ಗ್ಯಾರಂಟಿಗಳನ್ನು ಈ ಕೆಳಗೆ ಸಹಿ ಮಾಡಿರುವವರಿಗೆ ಪಾವತಿಯಾಗವಂತೆ ಪ್ಲೆಡ್ಜ್ ಮಾಡಿ ಟೆಂಡರ್‌ನೊಂದಿಗೆ ಸಲ್ಲಿಸುವುದು ಹಾಗೆ ಮಾಡಲು ತಪ್ಪಿದಲ್ಲಿ ಟೆಂಡರ್ ಅನ್ನು ತಿರಸ್ಕರಿಸಲಾಗುವುದು.
3. ಗುತ್ತಿಗೆದಾರರು ನೊಂದಾಣಿ ಮತ್ತು ನವೀಕರಣ ಪ್ರಮಾಣ ಪತ್ರದ ದಾಖಲೆಗಳನ್ನು ಗೆಜೆಟೆಡ್ ಅಧಿಕಾರಿಯಿಂದ ಕ್ರಮವಾಗಿ ಪ್ರಮಾಣೀಕರಿಸಿ ಟೆಂಡರ್‌ನೊಂದಿಗೆ ಸಲ್ಲಿಸುವುದು.
4. ಗುತ್ತಿಗೆದಾರರು ನಿರ್ವಹಿಸಿ ತೃಪ್ತಿಕರವಾಗಿ ಪೂರ್ಣಗೊಳಿಸಿರುವ ಕಾಮಗಾರಿಗಳ ಯೋಗ್ಯತಾ ಪ್ರಮಾಣ ಪತ್ರವನ್ನು ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಅಥವಾ ಕಾರ್ಯನಿರ್ವಾಹಕ ಇಂಜಿನಿಯರ್‌ರವರಿಂದ ದೃಢೀಕರಿಸಿ ಟೆಂಡರ್‌ನೊಂದಿಗೆ ಸಲ್ಲಿಸುವುದು.

**ಟೆಂಡರ್ ಫಾರಂಗಳಿಗಾಗಿ ಮನವಿ ಸಲ್ಲಿಸುವ ಗುತ್ತಿಗೆದಾರರು ತಮ್ಮ ಅರ್ಜಿಯೊಂದಿಗೆ ಸಲ್ಲಿಸಬೇಕಾಗಿರುವ ದಾಖಲಾತಿಗಳು**

1. ಗುತ್ತಿಗೆದಾರರು ತಾವು ಸಕಾಲದಲ್ಲಿ ಪೂರ್ಣಗೊಳಿಸಿರುವ ರೂ. 10.00 ಲಕ್ಷಗಳ ಮತ್ತು ಮೇಲ್ಪಟ್ಟ ಕಟ್ಟಡ ಕಾಮಗಾರಿಯನ್ನು ಕಳೆದ 5 ವರ್ಷಗಳ ಅವಧಿಯಲ್ಲಿ ಒಂದು ಆರ್ಥಿಕ ವರ್ಷದ ಅವಧಿಯಲ್ಲಿ ತೃಪ್ತಿಕರವಾಗಿ ಪೂರೈಸಿರುವುದರ ಬಗ್ಗೆ ಕಾರ್ಯನಿರ್ವಾಹಕ ಇಂಜಿನಿಯರ್ ದರ್ಜೆಗೆ ಕಡಿಮೆಯಿರದ ಅಧಿಕಾರಯುಕ್ತ ಪ್ರಾಧಿಕಾರದಿಂದ ಪಡೆದ ಯೋಗ್ಯತಾ ಪತ್ರವನ್ನು ಗುತ್ತಿಗೆದಾರರ ಟೆಂಡರ್ ಜೊತೆಗೆ ಹಾಜರುಪಡಿಸಬೇಕು, ಹಾಗೆ ಮಾಡಲು ವಿಫಲರಾದಲ್ಲಿ ಅಂತಹ ಟೆಂಡರನ್ನು ತಿರಸ್ಕರಿಸಲಾಗುವುದು.
2. ಗುತ್ತಿಗೆದಾರರು ನೊಂದಾಣಿ ಮತ್ತು ನವೀಕರಣ ಪ್ರಮಾಣ ಪತ್ರದ ದಾಖಲೆಗಳನ್ನು ಗೆಜೆಟೆಡ್ ಅಧಿಕಾರಿಯಿಂದ ಕ್ರಮವಾಗಿ ಪ್ರಮಾಣೀಕರಿಸಿ ಟೆಂಡರ್‌ನೊಂದಿಗೆ ಸಲ್ಲಿಸುವುದು.
3. ಟೆಂಡರ್ ದಾಖಲೆಗಳ ವೆಚ್ಚ ನಗದು ಅಥವಾ ಡಿ.ಡಿ. ಯನ್ನು ಸಲ್ಲಿಸುವುದು.

**ಸೂಚನೆ:**

1. ಯಾವ ಕಾರಣವನ್ನು ಸಹಾ ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ನಿರಾಕರಿಸುವ ಅಧಿಕಾರವನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾದಿರಿಸಿಕೊಂಡಿರುತ್ತಾರೆ.
2. ಟೆಂಡರ್ ಫಾರಂಗಳನ್ನು ನೀಡುವ ಸಮಯದಲ್ಲಿ ಗುತ್ತಿಗೆದಾರರು ತಮ್ಮ ಪಾಸ್ ಪುಸ್ತಕವನ್ನು ತಂದು ಅದರಲ್ಲಿ ರೆಕಾರ್ಡ್ ಮಾಡಿಸಿಕೊಳ್ಳತಕ್ಕದ್ದು. ಇಲ್ಲದಿದ್ದರೆ ಟೆಂಡರ್ ಫಾರಂಗಳಿಗಾಗಿ ಹಣ ಪಾವತಿ ಮಾಡಿದ್ದರೂ ಸಹಾ ಟೆಂಡರ್ ಫಾರಂಗಳನ್ನು ನೀಡುವುದಿಲ್ಲ ಹಾಗೂ ಟೆಂಡರ್ ಫಾರಂ ಬೆಲೆಯನ್ನು ಹಿಂದಿರುಗಿಸುವುದಿಲ್ಲ.
3. ಭರ್ತಿ ಮಾಡಲ್ಪಟ್ಟ ಟೆಂಡರ್ ನಮೂನೆಗಳನ್ನು ಟೆಂಡರ್ ಪೆಟ್ಟಿಗೆಗೆ ಹಾಕುವ ಸಮಯದಲ್ಲಿ ಗುತ್ತಿಗೆದಾರರು ತಮ್ಮ ಪಾಸ್ ಪುಸ್ತಕದಲ್ಲಿ ಸಂಬಂಧಪಟ್ಟವರಿಂದ ರೆಕಾರ್ಡ್ ಮಾಡಿಸಿಕೊಳ್ಳತಕ್ಕದ್ದು. ಇಲ್ಲದ ಪಕ್ಷದಲ್ಲಿ ಭರ್ತಿ ಮಾಡಲ್ಪಟ್ಟ ಟೆಂಡರ್ ನಮೂನೆಗಳನ್ನು ಟೆಂಡರ್ ಪೆಟ್ಟಿಗೆಗೆ ಹಾಕಲು ಅವಕಾಶ ನೀಡುವುದಿಲ್ಲ.

ಸದರಿ ವಿಷಯದಲ್ಲಿ ಹೆಚ್ಚಿನ ವಿಷಯಗಳಿಗೆ ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಲು ಕೋರಿದೆ.

**ಆರ್. ಪ್ರಕಾಶ್**
ಕಾರ್ಯನಿರ್ವಾಹಕ ಇಂಜಿನಿಯರರು,
ಲೋಕೋಪಯೋಗಿ ಇಲಾಖೆ ವಿಭಾಗ, ಕೋಲಾರ.

ಪಿ.ಆರ್. 682

## ನಮೂನೆ – 1

(9ನೇ ನಿಯಮ ನೋಡಿ)

**ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ವಿಜಾಪೂರ**

**ಅಧಿಸೂಚನೆ**

ಶಿಕ್ಷಣ ಇಲಾಖೆಯಲ್ಲಿ ಸರಕಾರಿ ಪ್ರಾಥಮಿಕ ಶಾಲೆ, ಟಕ್ಕಳಕಿ, ತಾ: ಜಿ: ವಿಜಾಪೂರ ಕಛೇರಿಯಲ್ಲಿ ಸಹ ಶಿಕ್ಷಕರಾಗಿ ಕೆಲಸ ನಿರ್ವಹಿಸುತ್ತಿದ್ದು ಶ್ರೀ **ನಾಗಪ್ಪ. ಜಟ್ಟೆಪ್ಪ. ಕೊಡಹೊನ್ನ** ರವರಿಗೆ ಅವರ ಹೆಸರನ್ನು **ನಾಗಪ್ಪ. ಜಟೆಪ್ಪ. ಹೊನಸೂರೆ** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಉಪನಿರ್ದೇಶಕರು (ಆಡಳಿತ)
ಸಾರ್ವಜನಿಕ ಶಿಕ್ಷಣ ಇಲಾಖೆ, ವಿಜಾಪೂರ.

ಪಿ.ಡಿ. 161

**ಲೋಕೋಪಯೋಗಿ ಇಲಾಖೆ**

ಕಾರ್ಯಪಾಲಕ ಅಭಿಯಂತರರ ಕಛೇರಿ ಕೋಲಾರ ವಿಭಾಗ, ಕೋಲಾರ

**ಬಾಬುವಾರು ಟೆಂಡರ್ ಮುಂದೂಡಿಕೆ ಪ್ರಕಟಣೆ ಸಂಖ್ಯೆ: 22-2/2007-08/ದಿನಾಂಕ: 26ನೇ ಅಕ್ಟೋಬರ್ 2007**

**ಉಲ್ಲೇಖ** 1. ಬಾಬುವಾರು ದರದ ಟೆಂಡರ್ ಪ್ರಕಟಣೆ ಸಂ: 22: 2007-08 ದಿನಾಂಕ: 10.08.2007.
2. ಬಾಬುವಾರು ಟೆಂಡರ್ ಮುಂದೂಡಿಕೆ ಪ್ರಕಟಣೆ ಸಂಖ್ಯೆ: 22-1/2007-08/ದಿನಾಂಕ: 18.09.2007.

ಉಲ್ಲೇಖದ ಈ ಕಛೇರಿ ಟೆಂಡರ್ ಪ್ರಕಟಣೆಯಲ್ಲಿ ಕರೆದಿರುವ ಟೆಂಡರ್‌ಗಳಲ್ಲಿ ಕ್ರಮ ಸಂಖ್ಯೆ: 7,9,10,11,16,18,19 ಮತ್ತು 20ರ ಕಾಮಗಾರಿಗಳಿಗೆ ಖಾಲಿ ಟೆಂಡರ್ ಫಾರಂಗಳನ್ನು ನೀಡುವ ಹಾಗೂ ಸ್ವೀಕೃತಿ ದಿನಾಂಕಗಳನ್ನು ಈ ಕೆಳಗಿನ ದಿನಾಂಕಗಳಿಗೆ ಮುಂದೂಡಲಾಗಿದೆ.

1. ಖಾಲಿ ಟೆಂಡರು ಫಾರಂಗಳನ್ನು ನೀಡುವ ದಿನಾಂಕ : ದಿ. 26.11.2007 ಸಾಯಂಕಾಲ 5.30 ಗಂಟೆವರೆಗೆ
2. ಭರ್ತಿ ಮಾಡಿರುವ ಟೆಂಡರುಗಳನ್ನು ಸ್ವೀಕರಿಸುವ ದಿನಾಂಕ : ದಿ. 28.11.2007 ಸಾಯಂಕಾಲ 4.00 ಗಂಟೆ ವರೆಗೆ

ಉಳಿದಂತೆ ಯಾವುದೇ ನಿಬಂಧನೆಗಳಲ್ಲಿ ಹಾಗೂ ನಿಯಮಾವಳಿಗಳಲ್ಲಿ ಬದಲಾವಣೆ ಇರುವುದಿಲ್ಲ, ಹೆಚ್ಚಿನ ವಿವರಗಳನ್ನು ವಿಭಾಗ ಕಛೇರಿಯಲ್ಲಿ ಎಲ್ಲಾ ಕೆಲಸಗಳ ದಿನದಂದು ಕೆಲಸದ ವೇಳೆಯಲ್ಲಿ ಪಡೆಯಬಹುದು.

ಕಾರ್ಯನಿರ್ವಾಹಕ ಇಂಜಿನೀಯರ್,
ಲೋಕೋಪಯೋಗಿ ಇಲಾಖೆ, ಕೋಲಾರ ವಿಭಾಗ, ಕೋಲಾರ.

ಪಿ.ಆರ್. 691

**ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ - 576 101**

**ಸಂಕ್ಷಿಪ್ತ ಟೆಂಡರು ಪ್ರಕಟಣೆ**

**ನಂ. ಕಾನಿಇಂ: ಬಂಮೀವಿ: ಉಡುಪಿ: ಎಇ: ಟೆಂಡರು ಸೂಚನೆ: 994 :2007-08: ದಿನಾಂಕ: 6ನೇ ನವೆಂಬರ್ 2007**

ಕರ್ನಾಟಕ ರಾಜ್ಯಪಾಲರ ಪರವಾಗಿ ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರು ಈ ಕೆಳಕಂಡ ಕಾಮಗಾರಿಗಾಗಿ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ಕರ್ನಾಟಕ ರಾಜ್ಯ ಲೋಕೋಪಯೋಗಿ ಇಲಾಖೆಯಲ್ಲಿ ಹೆಸರನ್ನು ನೋಂದಾಯಿಸಲಾದ ಅರ್ಹ ಸಿವಿಲ್ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿ ನಿಗದಿತ ನಮೂನೆಯಲ್ಲಿ ದ್ವಿಪ್ರತಿಯಲ್ಲಿ ಆಹ್ವಾನಿಸಲಾಗಿದೆ. ಭರ್ತಿ ಮಾಡಿದ ಟೆಂಡರುಗಳನ್ನು ಕಾರ್ಯನಿರ್ವಾಹಕ ಇಂಜಿನಿಯರ್, ಬಂದರು ಮತ್ತು ಮೀನುಗಾರಿಕಾ ವಿಭಾಗ, ಉಡುಪಿ ಇವರು ದಿನಾಂಕ: 6.12.2007 ರಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸುವರು. ಟೆಂಡರನ್ನು ಸಾಧ್ಯವಾದಲ್ಲಿ ಅದೇ ದಿನ 4.30 ಗಂಟೆಗೆ ತೆರೆಯಲಾಗುವುದು.

ನಿಬಂಧನೆಗಳೊಂದಿಗೆ ಟೆಂಡರನ್ನು ಒದಗಿಸಿದಲ್ಲಿ ತಿರಸ್ಕರಿಸಲಾಗುವುದು.

ಖಾಲಿ ಟೆಂಡರು ಫಾರಂಗಳಿಗಾಗಿ ಅರ್ಜಿಯನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಅದನ್ನು ಹಿಂತಿರುಗಿಸುವುದಿಲ್ಲ) ದಿನಾಂಕ: 5.12.2007 ರವರೆಗೆ ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಗುತ್ತಿಗೆದಾರರು ಅರ್ಜಿ ಫಾರಂನೊಂದಿಗೆ ರಿಜಿಸ್ಟ್ರೇಷನ್ ನವೀಕರಣ ಸರ್ಟಿಫೈಡ್ ಪ್ರತಿಯನ್ನು ಲಗ್ತೀಕರಿಸಬೇಕು.

